

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 433 (516)
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 05-02-2021.
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸನಿವಾಸಿ ವಸತಿ ಶಾಲೆಗಳ ಸಂಖ್ಯೆ ಎಷ್ಟು; | ಅಲ್ಪಸಂಖ್ಯಾತರ ಇಲಾಖೆಯಡಿಯಲ್ಲಿನ ವಸತಿ ಶಾಲೆಗಳ ವಿವರ ಈ ಕೆಳಕಂಡಂತಿದೆ :<br>(see table below) |
| ಆ. | ಸದರಿ ಶಾಲೆಗಳಲ್ಲಿ ಮೂಲಭೂತ ಸೌಲಭ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಾದರೆ ಅವುಗಳಾವುವು; | 2019-20ನೇ ಸಾಲಿನಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳಾದ ಕಾಟ್, ಬೆಡ್, ಶುದ್ಧ ಕುಡಿಯುವ ನೀರು (ಆರ್.ಓ.ಘಟಕ), ಸೋಲಾರ್ ವಾಟರ್ ಹೀಟರ್, ಸೋಲಾರ್ ಲೈಟಿಂಗ್ಸ್, ಡಿಜಿಟಲ್ ಕ್ಲಾಸ್, ವಿದ್ಯಾರ್ಥಿಗಳ ಸುರಕ್ಷತೆಗಾಗಿ ಸಿ.ಸಿ.ಟಿ.ವಿ. ಕ್ಯಾಮರಗಳನ್ನು ಅಳವಡಿಸಲಾಗಿದೆ. ಪ್ರಸ್ತುತ 2020-21 ನೇ ಸಾಲಿನಲ್ಲಿ ವಸತಿ ಶಾಲೆಗಳನ್ನು ದಿನಾಂಕ:01.01.2021 ರಿಂದ ಪ್ರಾರಂಭಿಸಲಾಗಿದ್ದು, ಅಗತ್ಯ ಮೂಲಭೂತ ಸೌಕರ್ಯಗಳನ್ನು ಅವಶ್ಯಕತೆ ಅನುಗುಣವಾಗಿ ಹಾಗೂ ಅನುದಾನ ಲಭ್ಯತೆಗೆ ಅನುಸಾರ ಕಲ್ಪಿಸಲಾಗುವುದು. |
| ಇ. | ಸದರಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕಾಲಮಿತಿ ವೇತನ ಬಡ್ತಿ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಕ್ಷಣ ಇಲಾಖೆಯಿಂದ ವರ್ಗಾವಣೆಗೊಂಡ 05 ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳಲ್ಲಿನ (ಶ್ರೀರಂಗಪಟ್ಟಣ, ದಕ್ಷಿಣಕನ್ನಡ, ವಿಜಯಪುರ ಕಲಬುರಗಿ ಮತ್ತು ರಾಮನಗರ) ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಕಾಲಮಿತಿ ವೇತನ ಬಡ್ತಿ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |

| ಕ್ರ.ಸಂ | ವಸತಿ ಶಾಲೆ | ಶಾಲೆಗಳ ಸಂಖ್ಯೆ |
|---|---|---|
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆ | 100 |
| 2 | ಮಾದರಿ ವಸತಿ ಶಾಲೆ (ನವೋದಯ) | 08 |
| 3 | ಸರ್ಕಾರಿ ಮುಸ್ಲಿಂ ವಸತಿ ಶಾಲೆ | 05 |
| | ಒಟ್ಟು | 113 |

| | | |
|---|---|---|
| ಈ. | ಬಂದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಕಾಲಮಿತಿ ವೇತನ ಬಡ್ತಿ ನೀಡಲಾಗುವುದು? | ಅಲ್ಪಸಂಖ್ಯಾತರ ಮೊರಾರ್ಜಿ ದೇಸಾಯಿ ವಸತಿ ಶಾಲೆ/ಕಾಲೇಜು ಮತ್ತು ಮಾದರಿ ವಸತಿ ಶಾಲೆ (ನವೋದಯ) ಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಗಳು 2016-17ನೇ ಸಾಲಿನಿಂದ ನೇರ ನೇಮಕಾತಿ ಮೂಲಕ ನೇಮಕಾತಿ ಹೊಂದಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ಟೈಮ್ ಬಾಂಡ್ ಅಡ್ವಾನ್ಸ್‌ಮೆಂಟ್) ನಿಯಮಗಳು 1983 ರನ್ವಯ ಸರ್ಕಾರಿ ನೌಕರರು ನೇಮಕಗೊಂಡ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಹೊಂದದೇ 10 ವರ್ಷಗಳ ಸೇವೆಯನ್ನು ಪೂರೈಸಿದ್ದಲ್ಲಿ ಅವರಿಗೆ ಕಾಲಮಿತಿ ವೇತನ ಬಡ್ತಿಯನ್ನು ನೀಡಬೇಕಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ನೌಕರರು 10 ವರ್ಷಗಳ ಸೇವೆಯನ್ನು ಪೂರೈಸದಿರುವುದರಿಂದ ಕಾಲಮಿತಿ ವೇತನ ಬಡ್ತಿಗೆ ಅರ್ಹರಿರುವುದಿಲ್ಲ.<br><br>ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/169/ಸೇ-2/2017, ದಿನಾಂಕ:06-10-2018 ರನ್ವಯ ಶಿಕ್ಷಣ ಇಲಾಖೆಯಿಂದ ವರ್ಗಾವಣೆಗೊಂಡ 05 ಸರ್ಕಾರಿ ಮುಸ್ಲಿಂ ವಸತಿ ಶಾಲೆಗಳಲ್ಲಿನ ಬೋಧಕ/ಬೋಧಕೇತರ ಸಿಬ್ಬಂದಿಗಳನ್ನು ಸರ್ಕಾರಿ ಸೇವೆಯಲ್ಲಿ ವಿಲೀನಾತಿಗೊಳಿಸದೇ ಇರುವುದರಿಂದ ಇವರು ಕರ್ನಾಟಕ ನಾಗರೀಕ ಸೇವಾ ನಿಯಮಗಳ ವ್ಯಾಪ್ತಿಯೊಳಗೆ ಪರಿಗಣಿಸಲ್ಪಡದ ಕಾರಣ ಸದರಿ ಸಿಬ್ಬಂದಿಗಳಿಗೆ ಕಾಲಬದ್ಧ ಮುಂಬಡ್ತಿ ಮಂಜೂರು ಮಾಡಲು ನಿಯಮಗಳಲ್ಲಿ ಅವಕಾಶ ಇರುವುದಿಲ್ಲ. |

ಸಂಖ್ಯೆ: **MWD 38 LMQ 2021**

**(ಶ್ರೀಮಂತ ಬಾಳಾಸಾಹೇಬ ಪಾಟೀಲ್)**
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು